

# ನವನೀತಂ

(ಭಾವ - ನವ್ಯ - ಗೀತೆಗಳು)



'ರಸಿಕ' ಪುತ್ತಿಗೆ.



ಪ್ರಕಾಶಕರು:-

ಅನ್ನಪೂರ್ಣಾ ಪ್ರಕಾಶನ,

ಪೋಸ್ಟ್:- ಕೂಡ್ಲಮೊಗರು,

ಮಂಜೇಶ್ವರ, ದ. ಕ.

# ಕೃತಜ್ಞತೆ.

ನನ್ನ ಈ ನವನೀತವನ್ನು ಬೆಳಕಿಗೆ ತರಲು ಹಲವಾರು ಸಹೃದಯರು ಕಾಂಚಾನವಿತ್ತರ್ ಭರವಸೆಯ ನುಡಿಯಿಂದ ಬೆನ್ನುತಟ್ಟಿದರು. ನನ್ನ ಕವಿತಾಶಕ್ತಿ ಎತ್ತಣಿಂದಲೋ ಬಹುದು, ಎಲ್ಲಿಗೋ ಹರಿಯುವುದು. ಅದನು ಹಾಕಿಡಲಿಕ್ಕೆ ಪಾತ್ರೆ ಕಡಿಮೆ. ಕೆಲವು ಹನಿ ಆಗಾಗ ಕೆಲವು ಪತ್ರಿಕೆಗಳಲಿ ಯಾರಿಗೂ ತಿಳಿಯದೆಲೇ ಮಿನುಗುವುದೂ ಉಂಟು. ಮೂಗಿನಲಿ ಉಂಡಾಗ ಹೊಟ್ಟೆ ತುಂಬುವುದೇ? ಇಲ್ಲ! ಬಾಯಲೇ ಉಣಬೇಕು. ಅಂತೇ ಕವಿತೆಗಳ ಪುಸ್ತಕದಲೇ ಕಟ್ಟಿ ಕೈಗೆ ಕೊಡಬೇಕು—ಎಂಬಾಸೆ ನನಗೆ.

ಆ ಎನ್ನ ಹಿರಿಯಾಸೆ ಹಿಂದೊಮ್ಮೆ ಹೊರೆಯಾಗಿ ನನ್ನ ತಲೆಯಲಿ ಕುಳಿತು ಇಂದಿಗೂ ಕಾಡುತಿದೆ ತಲೆನೋವಿನಂತೆ; 'ಅವಳ ನೆನಪಿನಂತೆ.' ಆದರಿಂದೀ ಕೃತಿಯು ಕೆಲವರೇ ಸಹೃದಯರ ಸನ್ಮನದ ಸಾಯದಿಂದ; ಆಯಾಸವಿಲ್ಲದೇ ಮುದ್ದಾಗಿ ಮುಗುಳಾಗಿ ನಿಮ್ಮೆಡೆಗೆ ಬರುತಿಹುದು. "ದಾನಿ ಪೆಸರನಾಶಿಸನ್" ಹಿರಿಯರಾಡಿದ ಮಾತು. ಅಂತೇ ದಾನಿಗಳೆಲ್ಲ ಹಿರಿಯ ದಾನಿಗಳು. ಆ ನನ್ನ ಬಂಧುಗಳು ಮಲೆನಾಡ ಬಂಧುಗಳು ಬಂಗಾರ ಬೆಳೆಯುವರು ಸಿಂಗಾರದಿಂದಿಹರು, ನಗುನಗುತ ದುಡಿಯುವರು, ಇಕ್ಕುವರು ಸಿಹಿಯಾಗಿ, ಆಡುವರು ನಯವಾಗಿ, ನೀಡುವರು ಕೈನೋಡಿ, ಬೇಡಿದರಲ್ಲವೇ ಅಲ್ಲ ಎಂದೆಂದೂ. ಎಲೆ, ಅಡಿಕೆ, ಬಿಸಿ ಕಾಫಿ, ಕಡುಬು, ಪಾಯಸ, ದೋಸೆ, ಇದುವೆ ಅವರಲ್ಲಿರುವ ಅತಿಥಿಗಳ ತಿಂಡಿ. ಹಿಂದೊಮ್ಮೆ ಕೇಳಿದ್ದೆ ಮಲೆನಾಡ ಆತಿಥ್ಯ ಬಹಳ ಹಿರಿದೆಂದು. ಅದನು ಕಂಡೆನ್ನ ಮನ "ಮಲೆನಾಡು ಮೇಲ್ನಾಡು ಪ್ರಕೃತಿಯ

ದೇವಿಯ ಬೀಡು. ಇಲ್ಲಿರುವ ಕಾಡೆಲ್ಲ ಕಾಫಿ ಅಡಿಕೆಯ ಗೂಡು. ದುಡಿದುಣ್ಣುವವರಿಗೆಲ್ಲ ಎದೆಯ ಗೂಡು"—ಎಂದೆನ್ನತೊಡಗಿ, ಅದು ನಿಜಕೂ ದಿಟವಾಗಿ ಇಂತು ನಿರ್ಭಯವಾಗಿ ಹೇಳಿತೆಲ್ಲ!

ನನ್ನ ಬೆಂಗಡೆ ಒಂದು ದಿವ್ಯ ಚೈತನ್ಯವಿದೆ. ಅದುವೇ ನನ್ನೀ ಕೃತಿಯ ಹೊರತಂದಿತು. ಇದನು ನೀವುಗಳೆಲ್ಲ ಓದಿ ಆನಂದಿಸಲು ಆ ದಿವ್ಯ ಚೈತನ್ಯ ಮುದಗೊಂಬುದು.

ಇಂತು,

**ಶ್ರೀ ಸದ್ಗುರು ವಿದ್ಯಾ ಶಾಲೆ,**
ಅಂಚೆ: ಬಸರೀಕಟ್ಟೆ.
ಚಿಕ್ಕಮಗಳೂರು ಜಿಲ್ಲಾ.

**'ರಸಿಕ' ಪುತ್ತಿಗೆ.**
ವಿಜಯದಶಮಿ ವಿಕಾರಿ ಸಂವತ್ಸರ.

# ಇದುವೇ ನವನೀತಂ...... ★

ಭಾವರಸಗಗಳ ಸಿಹಿಯು ಕಲ್ಪನೆಯ ಪಾಲ್ಗೊಡಕೆ
ಸತ್ವಾನುಭವದಳೆಯುು ಕಲೆ ಬೆರೆಯಲು
ತರ್ಕ ವೈಚಾರಗಳ ಬಳ್ಳಿಯಿಂ ಮನ ಮಥನ
ಮಾಡೆ ಉದಯಿಸಿತಾಗ ನವನೀತವು

ನಸ್ನಂತ ರಂಗಾಂತ ತಾರುಣ್ಯದಲೆಗಳಂ
ಮನದ ಮೇರುವು ಮೇರೆ ಮೀರಿ ತಿರುಗುತಿರೆ
ಪಾಲ್ಗಡಲ ಕಡೆದಂತೆ ಒಳಿತು ಕೆಡುಕುಗಳೊಡನೆ
ಕೊನೆಗೆ ಕೆನೆಗಟ್ಟಿರುವ ದಿವ್ಯ ನವನೀತಂ

ಜೀವ ಕೆಲಕಡೆ ತಿರುಗಿ ಕಲೆ ಹಾಕಿರುವ ಭಾವ
ಹವಿಯ ನೀಯುವೆ ಜಗಕೆ ವಿವಿಧ ಹಾವ!
ಭುವಿಯ ಮಾನಿಸರೇನು ಬಗೆದರೆನಗೇನಂತೆ
ಕವಿ ಕಂಡುದನು ರವಿಯೂ ಕಾಣಲಾರ

ನನ್ನೆದೆಯ ಗಡಿಗೆಯನು ಕಡೆದ ಹೆಣ್ಣಿನ ಕೈಗೆ
ಬಂಗಾರವಾಗಿರುವ ಕಂದನೈ ತರಲಿ
ನನ್ನ ಈ ನವನೀತ ಸವಿದ ಸಹೃದಯರೆಲ್ಲ
ಚೆನ್ನಾಗಿ ಕಡೆದಿರುವನೆಂದೆನ್ನಲಿ!

# ಇನ್ನಾದರೂ ಬಾರಾ...... ★

ನನ್ನ ಕನಸುಗಳೆಲ್ಲ ಸೋತು ತೂರಾಡುತಿವೆ
ನಡೆವ ದಾರಿಗಳೆಲ್ಲ ಸಿಕ್ಕಲಾಗಿಹುವು!
ಜೀವನವು 'ಅರೆ ಮರುಳು'; ಹಾರಿ ಹೋಯಿತು ನೆನಪು
ಸಾಧ್ಯ ಸಾಧನವೆಲ್ಲ ಧೂಳು ಪುಡಿಯಾಯ್ತು! ॥

ನಳಿದೋಳ ಬೇಲಿಯಿಂ ಕಾಪಿಡೆನ್ನಯ ಪ್ರಿಯನೆ!
ದೀಪ್ತ, ಹೂರುತುವಿನಂತಿರುವ ಚುಂಬನದಿ
ಆಗ ನನ್ನೀ ಮಸಣ ಹಸುರು ಬಯಲಾಗುತಲಿ
ಚಿಕ್ಕ ಮಗುವಿನ ಹಾಗೆ ಕಿಲಕಿಲೆನಬಹುದು! ॥

ಓಹ್ ಎನ್ನ ಮನವೆಷ್ಟು ವೈಶಾಲ್ಯವಾಗಿತ್ತು!
ಅದನು ನೆನೆಸಿದ ಹಾಗೇ ದುಃಖ ಉಕ್ಕುವುದು........
ಹಾರುತಿಹ ಹಂಸಗಳ ಬಿಳಿನೆಳಲ ಅಂಗಳದಿ
ಬೆಲೆಯುಳ್ಳ ಮೌಕ್ತಿಕವ ಬೆಳೆಯುತಿತ್ತು ॥

ಬಾಗಿ, ಭಾವದಿ ತುಂಬಿ, ಪೀಯೂಷ ತುಳುಕುತಿಹ
ನಿನ್ನ ನೋಟದಿ; ಇಂದ್ರಧನುವ ಕರಗಿಸುತ
ನಸುನಗುತ ನನ್ನೆಡೆಗೆ ಒಂದುಸಲ ನೋಡರಸೆ!
ನನ್ನೆದೆಯ ಮಸಣವದು ಸಗ್ಗವಾಗುವುದು ॥

ಇನ್ನಾದರೂ ಬಾರಾ...... ★

ನಿಜಕೂ ನಾನೀಗಿಲ್ಲಿ ಬಹಳ ಏಕಾಕಿಯಲಿ
ಪರಚುತಿದೆ ಎನ್ನುವಂ ಸಂಘರ್ಷದುಗುರು
ವಿಷವೇರಿ ಹಗಲಿರುಳೂ ಚಡಪಡಿಸಿ ಕೂಗುವೆನು
ಇನ್ನಾದರೂ ಬಾರಾ ನನ್ನ ನಲ್ಲ! ॥

ಜವ್ವನದ- ಜಲಪಾತದಂಥ- ನಿರ್ವ್ಯಂದ್ವನಗು......
ಉನ್ಮುಕ್ತ ಮನದ ಆ ಮಧುರ ಕನಸುಗಳು......
ಭಾವಗಳ ವೇಣಿಯಲಿ ಪೋಣಿಸಿದ ಕವಿತೆಗಳು......
ಪಾರಿಜಾತದ ಹಾಗೆ ಮಂಕಾದುವು ॥

ಕಲ್ಪನೆಯ ಕಾಲ್ಗೆಜ್ಜೆ ಉಲಿವ ಕಿಂಕಿಣಿ ನಾದ
ಕೇಳಿಸದೆ ದಿನವಾಯ್ತು ಬಹಳ! ಬಹಳ!
ಒಳಗೊಳಗೇ ಕರಕರಗಿ ಅಲ್ಲೇ ಸಾಯುವುದೆಲ್ಲ
ಇನ್ನಾದರೂ ಬಾರಾ ನನ್ನ ನಲ್ಲ! ॥

ದಡಗಳಿಂದುಕ್ಕೇರಿ ಹಾರಿ ಹರಿಯುವ ನದಿಯ
ತೆರದಿ ನಾನಂದೊಮ್ಮೆ ಹಾಡಿ ಕುಣಿದಿದ್ದೆ
ನನ್ನ ಭಾಗ್ಯದ ಕೈಗೆ ಯಾವುದೂ ಸಿಗಲಿಲ್ಲ
ಇನ್ನಾದರೂ ಬಾರಾ ನನ್ನ ನಲ್ಲ! ॥

ಸಾವಿನೆಡೆ ಸಂಧಿರುವ, ಜೀವವಿಲ್ಲದ, ಹಳೆಯ
ಯಾವುದೋ ಒಂದುಥರಾ ಭಾವಬಂದು
ಆಗಾಗ ವೈದಡವಿ ಕೆಚ್ಚನೀಯುತ್ತಿಹುದು
ಗಾಢಾಂಧಕಾರದಲಿ ಕೋಲ್ಮಿಂಚಿನಂತೆ!

ಜೀವನದ ಸಂಗೀತ ಗಾಳಿಯಲಿ ತೇಲುತಿದೆ
ಭಾವನೆಯ ನವನೀತ ಮೆಲ್ಲ ಕರಗುತಿದೆ
ಯಾವುದೋ ಹೆಬ್ಬಾವು ಸುತ್ತಿಕೊಂಡಂತಿಹುದು
ಇನ್ನಾದರೂs ಬಾರಾs ನನ್ನ ನಲ್ಲ!

ನಾನೊಂದು ಪರಿಮಳಿತ ಜಾಲದಿಂದಾವೃತನು
ಆಜಾಲ; ಈ ಸರ್ಪಜಾಲ ಸುಡಬಹುದು
ಎಂಬ ಭರವಸೆ ಒಂದೇ ಯಮನಿಂದ ಬಿಡಿಸಿಹುದು
ಇನ್ನಾದರೂs ಬಾರಾs ನನ್ನs ನಲ್ಲ!



# ಮೇರುತಿ...... ★

ಮಲೆನಾಡ ಬನಸಿರಿಗೆ ಕಳಸವಿಟ್ಟಂತಿರುವ
ಓ ಪರ್ವತಾಗ್ರಣಿಯೇ ನಿನಗೆ ವಂದನವು ! ॥

ಮೇರುವನು ಕಂಡಿರುವ (?) ನಿನ್ನ ಕಾಣದ ಕಣ್ಣು
ಮಾರುತಿಯು 'ಮಂಗ'ನೆಂದಂತೆ ಹೇಳಿ
ನೀನು ಮೇರುತಿಯಂತೆ – ಯಾಕೆ ಮೇರುವೆ ಹೌದು
ನಿನ್ನ ದೊಡ್ಡಸ್ತಿಕೆಗೆ ಏನು ಕೊರತೆ ? ॥

ನೀರಿನೊರತೆಯನಿಟ್ಟುಕೊಂಡಿರುವ ಗರ್ಭವಿದೆ
ನೂರಾರು ಮೈಲಗಲ ಹಸಿರು ನೋಟವಿದೆ
ಏರಿ ಬರುವರಿಗೆಲ್ಲ ಹುರುಪು ನೀಡುವ ನಿನ್ನ
ಮೇರು ಸಮುದಾಕಾರಕೇನು ಕೊರತೆ ? ॥

ನೂರಾರು ಯುಗಗಳಿಗೆ ಹಿಂದೆ ಹುಟ್ಟಿದ ನೀನು
ಕಾರುತಿದ್ದಿರಬಹುದು ಉರಿಕೆಂಡಗಳನು
"ಹರೆಯದುರುಬಿಳಿದ ಬಳಿಕಿನ್ನು ಆರ್ಭಟವೇಕೆ?"
ಮರೆತುಬಿಟ್ಟಿದನೆಲ್ಲ ಮೌನಿಯಾಗಿರುವೆ ! ॥

ವರ ತಪೋಧನನಂತೆ ಬುದ್ಧನಾಗಿಹೆ ನೀನು
ಸಿಲುಬೆಗಣಪರ ಹೊತ್ತ ತಲೆ ನಿನ್ನ ದಲ್ತೆ!
ಎಲ್ಲರೂ ನನ್ನವರೇ ಯಾರೂ ಬೇರಿಲ್ಲೆನಗೆ
ಎನುವ ತತ್ವವ ಜಗಕೆ ಸಾರುತಿರುವೆ! ॥

ಕೋಟಿ ಸೂರ್ಯೋದಯವ ಕಂಡ ನಿನ್ನಯ ಮಣ್ಣು
ಸಾಟಿ ಇಲ್ಲದ ದಿವ್ಯ ಜೀವ ಹಣ್ಣು
ಕೋಟಿ ಕಲ್ಪಾಂತಗಳು ದಾಟಿಹೋದರೂ ಕೂಡ
ಏಟು ತಗಲದು ನಿನ್ನ ಗಾಂಭೀರ್ಯಕೆ! ॥

ನೀನಮರ ನೀಭವ್ಯ ನೀನು ಹಿರಿಯನೂ ಕೂಡ
ನಿನ್ನ ಹಿರಿತನವೆಮಗೆ ಬರುವಂತೆ ಮಾಡು
ಬೇಡ, ನಿನ್ನಲ್ಲಿರುವ ಒಂದೇ ನೀರೊರತೆಯನು
ನನ್ನೆದೆಯ ನೆಲೆಯಲ್ಲಿ ನೆಲೆನಿಲ್ಲಿಸು! ॥

ನೀನಿಷ್ಟು ಎತ್ತರಕೆ ಬೆಳೆದು ನಿಲ್ಲಲಿಕಾಗಿ
ಎಷ್ಟು ಕಲ್ಪಾಂತರದಿ ತಪಿಸುತಿಹೆ ನಿತ್ಯ!
ನಿನ್ನ ಒಂದೇ ಒಂದು ಕಾಲಿನೆತ್ತರದಷ್ಟು
ಬೆಳೆಯಲೆತ್ನಿಸುತಿಹನೆ ಈ ಮನುಜ ನಿತ್ಯ! ॥

ಸಹನೆಯೆಂಬರೆ ನೀನು ಶಾಂತಿಯೆಂದರೂ ನೀನೆ
ಗಾಂಭೀರ್ಯವೆಂದರೂ ನಿನ್ನ ಮೂರ್ತಿ!
ಲೋಕಸೇವಕನೆಂದು ಹೇಳಿಕೊಳ್ಳುವ ನರನು
ಒಂದುಸಲವಾದರೂ ನಿನ್ನ ಕಂಡಿಹನೆ! ॥

ಮೋಡ ನಿನ್ನಯ ಮುಕುಟ ಕಗ್ಗಲ್ಲುಗಳ ಹಾರ
ಹಸಿರು ಹಾಸಿದ ಕಾಡು ದಿವ್ಯಾಂಬರ!
ಮರಿಗುಡ್ಡಗಳ ಗಡಣವೇ ನಿನ್ನ ಒಡ್ಯಾಣ
ಹರಿವ ನೀರಿನ ಒರತೆ ಕಾರುಣ್ಯದೊರತೆ! ॥

ಹಸುಗಳಂಭಾ ಕೂಗು, ತುರುಗಾಹಿಗಳ ಕೊಳಲು
ಠೊಣ್ ಠಣಕ್ ದನಿಗೈವ ಬಿದಿರು ಗಂಟೆ!
ಸರಿಗಮವ ನುಡಿಸಲಿಕೆ ಶುಕಪಿಕಾದಿಗಳಿರಲು
ಆಷಾಢ ಮಾಸದಲಿ ಸಂಗೀತ ಧಾಮ ॥

ಕೆಳಗೆ ಇಳಿದು ಬರಬೇಡ ನಿಲ್ಲು ಅಲ್ಲೇ ನಿಲ್ಲು
ಇಲ್ಲಿದ್ದ ಜನ ನಿನ್ನ ನಿಂದಿಸುವರು!
ಇದ್ದಲ್ಲಿಯೇ ಇದ್ದು ಬಡಜನರ ಮನ ಗೆದ್ದು
ದುಡಿಮೆಗಾರರಿಗೆಲ್ಲ ಅಶನ ನೀಡು ॥



# ಕಾಯುಲೆಂತು ?...... ★

ಹೃದಯ ಸಿಂಹಾಸನದಿ ನಸುನಗುತ ಕುಳಿತಿರುವ
ನನ್ನ ಪರಮಾತ್ಮನೇ ಹೊರಗೆ ಬಾರಾ!
ನಿನ್ನ ಮುಖ ಚಂದ್ರಮನ ಕಾಣ ಕೌತೂಹಲದಿ
ಮನ್ಮನದ ಕುಮುದವನ ಅರಳಿಹುದು ಪೂರಾ! ॥

ಅಂತರಾಳದಿ ನೀನು ಅಡಗಿದ್ದರೂ ಕೂಡ
ದೇಹ ಸಾಕ್ಷಾತ್ಕಾರ ಬಯಸುತಿಹುದು! ॥

ಪರಿರಂಭದಲಿ ಮುಳುಗಿ ಅಧರ ಮಧುವಂ ಕುಡಿವ
ಪರಮ ಅಮರಾನಂದ ಆಶಿಸುವೆನು
ನಿನ್ನ ಹೊಳಪಿನ ಕಾಂತಿ ಆಕರ್ಷ ಸೂಜಿಯೊಲು
ನನ್ನ ಜೀವದ ಕಳೆಯನೆಳೆಯುತಿಹುದು ॥

ಭಾವ ಜಗದಲಿ ನೀನು ತೇಲುತಿದ್ದರೂ ಕೂಡ
ಜೀವ ಸಾಕ್ಷಾತ್ಕಾರ ಬಯಸುತಿಹುದು! ॥

ಜಗವರಿಯ ಬೇಕಾದ ಅಳಿವು ಬಾರದ ರೂಪ!
ಆಗುಹೋಗುಗಳಿಂದ ಹೊರತಿರುವ ದೀಪ!
ಮಗುವು ನಾನೆಲೆ ನಿನ್ನ ಪಾದಾರವಿಂದದಲಿ
ಬೇಗ ಬಾರೆನ್ನರಸೇ ಕಾಯುಲೆಂತು ? ॥



# ಮಿಲನಯಾಮಿನಿ...... ★

ಕತ್ತಲಾಗುವ ಹೊತ್ತು ಒಬ್ಬನೇ ನಡೆದಿದ್ದೆ
ಹಸುರೆಲೆಯ ಪಂಜರದ ನಡುವೆ ತೂರಿ
ಸುತ್ತ ಬಾಗಿದ ಕೊಂಬೆ ಕೈಗಳಿಂದಪ್ಪುತಲಿ
ಹತ್ತಿರಕೆ ಕರೆಯಿತಾ ಕಾಫಿ ಗಿಡವು ॥

ಕಾರಿರುಳು ಕವಿದಿರುವ ಕಾಫಿ ತೋಟದ ಒಳಗೆ
ಕಾಡುಮಲ್ಲಿಗೆಯಂತೆ ಮಿಣುಕುಹುಳ ಗುಂಪು!
"ಕತ್ತಲೆಯ ಮರೆಯಲ್ಲಿ ಮೈಗಣ್ಣನೇಕಿಲ್ಲ?
ಇಲ್ಲ ಅವನೇಂಗೈವ? ಅಲೆಯುತಿಹನೆ?......? ॥

ಯಾವುದೋ ಒಂದು ಮಧು ಸಂಗೀತ ಸಾಗಿಹುದು
ಮೆಲ್ಲ ಮೆಲ್ಲನೆ ಬೀಣೆ ಮೀಂಟಿದಂತೆ!
ಬೈಗು ತಂಗಾಳಿಯಲಿ ಹಿಂದೋಳ ಹಾಡಿದರೆ
ಮೆಲ್ಲ ಮೊಳಗುವ ಹಾಗೆ ಕೇಳುತಿತ್ತು...... ॥

ತಾಳ ವಾದ್ಯಗಳಂತೆ ಮರಿ ಮುದಿಯ ಕಪ್ಪೆಗಳು
ವಟ ವಟರ್ ಟರಿ ಟೀರಿ ಥ್ರೊಂ ಎನ್ನುತಿಹವು
ಅದಕೆ ಸಂಗೀತದೊಲು ಜೀರುಂಡೆಗಳ ಜೀರು
ತಂಬೂರಿ ಮೀಂಟಿದೊಲು ನುಸಿಗಾಯನಂ ॥

ಮೃದು ಮಂದ ಚರಣವಂ ನಭಪಥದೊಳಿರಿಸುತ್ತ
ಶುಕ್ಲಪಂಚಮಿ ಮೆಲ್ಲ ನಿಳೆಗಿಳಿದಳು!
ಆಗಸದ ಹಾಸುಗೆಗೆ ಕರಿಬಟ್ಟೆ ಹಾಸಿಹುದು
ಮೇಲೆ ಚೆಲ್ಲಿದೆ ಅರಳು ಹೂವು-ತಾರೆಗಳು...... ॥

ಪಾರಿಜಾತದ ಗಂಧ ಮಂದಮಾರುತನೊಡನೆ
ಎಲ್ಲಿಗೋ ತಿರುಗಾಡ ಹೊರಟಿರುವಳು!
ಬಾಗಿಲಿನ ಹೊರಗಾಚೆ ಗೆಳತಿಯರ ಕಿಲಕಿಲವೋ......?
ಮಾಂದೋಪಿನಲ್ಲುಲಿವ ಕಿರಿಯ ಹಕ್ಕಿಗಳೋ......? ॥

ಭಾವುಕನು ನೀನೆಂದು ಹೇಳದಿರು ನನ್ನುವನು
ಭವದ ಬಂಧನ ತೊರೆದ ಯೋಗಿಯಾನು!
ಮಿಥ್ಯವೆಂದೆನ್ನದಿರು ಇದುವೆ ಬ್ರಹ್ಮಾನಂದ
ನೈಜದಲ್ಲೇನಿಹುದು ಸಿರಿಯ ಚಂದ! ॥

ಸಜ್ಜೆಯಲಿ ಮಿಣುಕುತಿಹ ಮಿಣುಕು ದೀಪದ ಹಾಗೆ
ಹಸಿರು ಮರದೆಲೆಮರೆಗೆ ಮಿಣುಕುಹುಳವೋ?......?
ತಳಿರವನ ತಾರುಣ್ಯದರಸಿ ಸಂಧ್ಯಾರಾಣಿ
ತನ್ನಿನಿಯನನು ನಿಶಿಯ ಬಳಿಗೆ ನೂಕುವಳೋ? ॥

ಮಿಲನಯಾಮಿನಿ...... ★

ಇದು ಎಂಥ ಮಿಲನವೋ ಎಂದು ನೀ ನಗಬೇಡ
ದಿನನಿತ್ಯ ನಡೆಯುತಿದೆ ವಿಧಿಯ ಮಾರಿ
"ಇದು ಸತ್ಯ ಇದು ಶಾಂತ ಸೌಂದರ್ಯ ಸ್ರೋತಕಣಾ"
ಎಂದು ಯಾರೋ ಹಿಂದೆ ಅಂದ ಹಾಗಾಯ್ತು ॥

## ಕುಸುಮ ಮುಖದಿಂದಾ...... ★

ಹೊರುತುವು ಹರಡಿಹುದು ತಂಗಾಳಿ ಬೀಸಿಹುದು !
ತರುಪುಷ್ಪಲತೆಗಳಿಗೆ ಪ್ರಾಯಬಂದಿಹುದು ॥

ಯೌವನವು ತಲೆನಿಮಿರಿ ಮದದಿಂದ ಹಾಡಿರಲು
ಝೇಂಕರಿಸಿ ಮುದದಿಂದ ಭ್ರಮರ ಬೃಂದ! ॥

ಮಲಯ ಮಾರುತ ಮೆಲ್ಲ ಮೆಲ್ಲ ಬೆಂಗಡೆ ಬಂದು
ಕದ್ದೊಯ್ದ ಸೌರಭವ ಕುಸುಮ ಮುಖದಿಂದ! ॥

# ಸೋತೆನೋ ನಿನ್ನಾಣೆ!...... ★

ಸೋತೆನೋ ನಿನ್ನಾಣೆ ಬೇಡ ಸಾಕೆನಗಿನ್ನು
ಜೀವನದ ಕಹಿಸಿಹಿಯ ಚ್ಯವನಪ್ರಾಶ!
ಮರೆವು ನೆನಪಿನ ಮೂಕದಿನ್ನೆಯನ್ನೇರಿದೆನು
ನೆರಳು ಬೆಳಕಿನ ಕಣ್ಣಮುಚ್ಚಾಲೆ ಕಂಡೆ ॥

ಸುಖದುಃಖ ಕನಸುಗಳ ಕಂಡು ಕಳಿದೆನು ನೆನ್ನೆ-
ನೆನ್ನೆಯೆನ್ನುವವರೆಗೆ ಸಾಕಾಯ್ತು ಇಂದು
ನಾಳೆ ಎನ್ನುವುದನ್ನು ಕಾದು ಸೋತಿದೆ ಜೀವ
ನಿನ್ನಾಣೆ ಸಾಕಾಯ್ತು ಮುಚ್ಚಿಬಿಡು ಕದವ! ॥

ಆದರ್ಶ ಲೋಕದಲಿ ಚಕ್ರಾಧಿಪತಿಯಾಗಿ
ಪ್ರೇಮ ಸಿಂಹಾಸನವನಾಳುತಿದ್ದೆ
ಧಿಕ್ಕಾರದಣಿ ಗುಂಡು ಸಿಡಿದು ದಿನ ಬಹಳಾಯ್ತು!
ಸೋತೆನೋ ನಿನ್ನಾಣೆ ಸಾಕಾಯ್ತು ನನಗೆ ॥

ಚಿಂತೆ ಜಿಗಣೆಗಳೆಲ್ಲ ಮೆದುಳಿಡೀ ಹರಡಿಹವು
ಸಂತೆಯಂತಾಗಿಹುದು ಮನಸು ಪೂರಾ
ಮರುಳುಗಾಡಿನ ತೃಷಿತ ಕುರುಡನಂತಾಗಿರುವೆ
ನನ್ನ ಸುತ್ತೆತ್ತಲೂ ಶೂನ್ಯ ಶೂನ್ಯ ॥

## ಸೋತೆನೋ ನಿನ್ನಾಣೆ...... ★

ಪ್ರೇಮ ತ್ಯಾಗಗಳಿಂಗೆ ಕಾಮ-ಸ್ವಾರ್ಥದ ತೂಕ
ಆದರ್ಶ ಉದ್ಧಾರ; ಹುಚ್ಚರಾಟ!
ಹಣವಿಲ್ಲದವನೀಗೆ ಬದುಕಿಗೇ ಎಡೆಯಿಲ್ಲ
ಸಾಕು ಈ ಜಾತಿಮತ ಪಂಥಗಳ ನರಕ ॥

ಜೀವನಕೆ ಬೆಲೆಯಿಲ್ಲ! ಯೋಗ್ಯತೆಗೆ ಚಿಕ್ಕಾಸು
ಪ್ರತಿಚಣವೂ ಗೆಲ್ಲುತಿದೆ ಸೈತಾನ ಸತ್ಯ
ಬಡವ ತಿಂದರೆ ಹಸಿದು, ಧನಿಕ ತಿಂದರೆ ಪಥ್ಯ
ಇದನೆಲ್ಲ ಕಾಣಲಿಕೆ ಸಹನೆ ಇಲ್ಲ! ॥

ಇದು ನಿರಂತರ ನಡೆವ ತಾಮ್ರಶಾಸನವಲ್ಲ
ಒಂದಲ್ಲ ಒಂದು ದಿನ ಬದಲಾಗಬಹುದು
ಆದರಂದಿನ ತನಕ ಕಾಯಲಾರೆನೋ ನಾನು
ಸೋತೆನೋ ನಿನ್ನಾಣೆ ದೇವರಾಣೆ! ॥



# ನೀನೂ ನಾನೂ...... ★

ನೀನೂ ಚಂದ....
ನಾನೂ ಚಂದ....
ಒಂದೆಡೆ ಸೇರಲು ಬ್ರಹ್ಮಾನಂದ!

ಜೀವನೂ-
-ಚಂದ-
ಜೀವನವೂ

ಇದುವೂ ಸರಿಯೇ!
ಎಲ್ಲಾ ಸರಿಯೆ!

ಆ ಕಡೆ ಬರಲೆ?
ಈ ಕಡೆ ಬಹೆಯಾ?

ನಿನ್ನಯ ಕಡೆಗೆ ನಾ ಬರುತಿಹೆನು
ನನ್ನಂ ನೀನೂ ಎಳೆಯುತ್ತಿರುವೆ

ಎಲ್ಲೋ ಮಿಲನ
ಎಲ್ಲೋ ಸರಸ!

ದುಃಖವೂ ಬರಲಿ ಸುಖವೂ ಇರಲಿ
ಜಗಳವೂ ಒಂದೇ ಎಲ್ಲಾ ಒಂದೇ

ಇದುದೇ ನಮ್ಮಯ
ಬಾಳಿನ ಅಮೃತ



# ಜನಿವಾರ......ಜ......ನಿವಾರ (ಣೆ!) ★

ಮೂರೆಳೆಯ ಜನಿವಾರ ಹೆಗಲಿನಲಿ ಧರಿಸುವುದು
ಆಧುನಿಕ ಯುಗದಲ್ಲಿ ಒಂದು ಶಾಪ
'ಮುಂದುವರಿದಿರುವ ಜನ'– ಎಂದು ಹಿಂದಕೆ ನೂಕಿ
'ಹಿಂದುಳಿದ' ಜನರೆಲ್ಲ ಮುಂದೆ ಸಾಗಿದರು ॥

ಜಗದರಿವು ಬಂದಾ ಅಘವಿಲ್ಲವೆನ್ನುವರು
ಗಂಗೆಯಲಿ ಮುಂಗಿದರೆ ಸ್ವರ್ಗಸಿಕ್ಕುವುದೆ?
ರೋಗ ಬಂದಾಗಲೇ ವೈದ್ಯರನು ಕಂಡಂತೆ
ಆಪತ್ತು ಬಂದಾಗ ಜಪಮಾಲೆ ಬೇಕೆ? ॥

ಅಣುಯುಗದ ಮಧ್ಯದಲಿ 'ಅಣುಭಾಷ್ಯ' ಓದಿದರೆ
ಜಗದಗಲ ಹರಡಿರುವ ಸತ್ಯ ತಿಳಿಯುವುದೆ?
ಮಧ್ವ ಶಂಕರರಿದ್ದ ಸನ್ನಿವೇಶವೇ ಬೇರೆ
ಮಳೆಗಾದ ಕೊಡೆ ಚಳಿಗೆ ಆಗಬಹುದೆ? ॥

ಹಳೆಯ ಮುದಿಗೊಡ್ಡುಗಳು ದಾರಿಬಿಡಬೇಕಿನ್ನು
ಹೊಸ ಹಸುರು ಹುರುಪುಗಳು ಮುಂದೆ ಬರಲಿ
ಕತ್ತಲೆಯು ತೆರೆ ಎತ್ತಿ ಬೆಳಕು ಬರಗೊಡಲೀಗ
ಮರೆತರದುವೇ ಸೀಳಿ ನುಗ್ಗಿ ಬರಬಹುದು! ॥

ಕಾಡು ಕಡಿದರೆ ಮತ್ತೆ ಚಿಗುರು ಮೂಡುವುದುಂಟು
ಉಪದೇಶ ಮಾಡಿದರೇ ಬೆಳಕು ಹರಿಯುವುದೆ?
ಒಂದಳಿದು ಇನ್ನೊಂದು ಹುಟ್ಟಬೇಕೇ ವಿನಹಾ
ಇದ್ದಂತೆಯೇ ಬರಲು ಜಾಗವಿಲ್ಲ! ॥

ನೀನು ನಿನ್ನಿರವನ್ನು ಅರಿತು ನಡೆ, ಜಗದಗಲ
ನಿನ್ನಂತೆಯೇ ಪರರೂ ಎಂದರಿತುಕೋ!
ಸ್ವಾರ್ಥ ವಂಚನೆ ಮೋಸ ಕಪಟ ಡಂಬಾಚಾರ
ಇವುಗಳನು ಮರೆತುಬಿಡು ಸ್ವರ್ಗ ಬಹುದು! ॥

ಹೇಳಿದನು ಕೇಳಿದನು ಇದ್ದಂತೆ ನಂಬದಿರು
ಯಾವುದನ್ನೂ ತೀರ ಮನನ ಮಾಡು
ಯಾಕೆ? ಯ್ಯಾವುದು? ಹೇಗೆ? ಇವುಗಳನು ಉತ್ತರಿಸು
ಆಗ ನಿನ್ನುದ್ಧಾರವಾಗಬಹುದು ॥

ನಾವೆಲ್ಲರೂ ಒಂದೇ ತಾರತಮ್ಯಗಳಿಲ್ಲ
ಎಲ್ಲರೂ ಬದುಕಲಿಕ್ಕಾಗಿ ಹುಟ್ಟಿಹರು
ಹಸಿದ ಹೊಟ್ಟೆಗೆ ಕೂಳು ದುಡಿದು ಹುಟ್ಟಿಸಬೇಕು
ದುಡಿಯಲಿಕ್ಕಾಗದಿರೆ ಬದುಕು ಬೇಡ! ॥

# ನಿಲ್ಲು ನಿಲ್ಲೊಂದು ಚಣ!...... ★

ವಿಜ್ಞಾನ ಯಾನದಲಿ ಕುಳಿತು ಹಾರುವ ನರನೆ
ನಿಲ್ಲು! ನಿಲ್ಲೊಂದು ಚಣ! ಹಿಂತಿರುಗಿ ನೋಡು!
ನೀನ್ಯಾರು? ನೀನೇಕೆ? ನೀನೆಲ್ಲಿ ನಡೆವೆ?
ಈ ಮೂರು ಮಾತುಗಳನಿಂತು ಯೋಚಿಸೆಲೆ! ॥

ಪ್ರಗತಿಯೇ ಯಾಕಾಗಿ? ಪೌರುಷವೇ ಯಾತರದು?

ಚಂದ್ರಲೋಕವನೇರಿ ಅನ್ನಮಳೆಗರೆವೆಯಾ?
ಅಲ್ಲ! ಅಲ್ಲೊಂದೂರ ಕಟ್ಟ ಬಯಸುವೆಯಾ?
ಅನ್ನ ಅಕ್ಷರವಿರದ ನಿನ್ನವರ ಕಾಣೆಲವೋ
ನೀನೊಬ್ಬ ಬದುಕಿದರೆ ಮಾತ್ರ ಸಾಕೆ? ॥

ಧಿಲ್ಲಿಯಿಂದಿಳಿದು ಬಾ! ಹಳ್ಳಿಯನು ನೋಡು ಬಾ!

ಇಲ್ಲಿ ನಿನ್ನಯ ಜ್ಞಾನಭಂಡಾರವಂ ತೆರೆದು
ನೆಲದ ಮಕ್ಕಳಿಗೆಲ್ಲ ದೈವತ್ವ ನೀಡು!
ಸುಪ್ತಚೇತನಗಳಂ ಹೊಡೆದು ಹುರಿದುಂಬಿಸೆಲೆ
ಇಲ್ಲೇ ರಚಿಸಿದರೇನು ನಾಕಲೋಕ? ॥

ಪಟ್ಟದಿಂದಿಳಿದು ಬಾ, ಪದವಿಯನು ಬಿಸುಟು ಬಾ

ಇಲ್ಲಿಹುದು ಅಣುಗುಂಡುಗಳಂ ಮೀರಿಪ ಶಕ್ತಿ
ಇಲ್ಲಿಹುದು ಜಗ ಗೆಲುವ ಚೈತನ್ಯ ಶಕ್ತಿ
ಇಲ್ಲಿಹುದು ಕಲ್ಯಾಣ ರಾಮರಾಜ್ಯದ ಮೂಲ
ನೀನ್ ಅರಸಿ ಹೋಗುವುದು ನಾಯಿಬಾಲ! ॥

ಭೂಮಿ ತಿರುಗುವುದನ್ನು ನೀ ಬಲ್ಲೆಯಂತೆ!
ಎಲ್ಲವನು ಕೂಡಿಯೇ ಅದು ಸರಿವುದಂತೆ!
ಅಂತೆ ನೀನೂ ನಿಂತು ಎಲ್ಲರನು ಕೂಡು!
ಒಬ್ಬನೇ ಸಾಗಿದರೆ ಪ್ರಗತಿಯೆಂತು? ॥

ಸೀಳಿಬಿಡು ಅಂಧತ್ವ! ಒತ್ತಿಬಿಡು ಸ್ವಾರ್ಥವಂ
ಮುಳುಗುತಿರುವವರನ್ನು ಮೇಲಕೆತ್ತು! ॥

ತಿಳಿವಿನೊಳಿತುಗಳೆಲ್ಲ ಕೊಟ್ಟೆಯಾದರೆ ಜಗಕೆ
ಉಳಿವಿಗೊಳಿತಲ್ಲವೋ ನಿನ್ನ ಪೀಳಿಗೆಗೆ
ಅಳಿವಿನರೆಗಳಿಗೆಯಲಿ ಹಿಂತಿರುಗಿ ನೋಡಿದರೆ
ಉಳಿದವರು ಯಾರುಂಟು ನಿನ್ನ ನಂಬಿ? ॥



# ಛೀ......ಯಾಕೆ? ಹೀಗೆಲ್ಲ? ★

ಬೇವಿನಲಿ ಬೆಲ್ಲವಿದೆ ಸಾವಿನಲಿ ಸತ್ವವಿದೆ
ಬೆಲ್ಲವೇ ಬಯಸಿದರೂ ಸಿಗುವುದಿಲ್ಲ!
ಬೇಕೆಂಬುದನು ಮರೆತು; ಬೇಡದಿದ್ದರೂ ಕೂಡ
ಬೆಲ್ಲವೇ ಬಂದಾಗ ಬಿಡುವುದಲ್ಲ ॥

* *

ಸೇರುಕಲ್ಲಿಗೆ ತಾಗಿ ನಿಂತಿರ್ದ ಕರಿಯ ನಾಯ್
ಸರ್ರೆಂದು ಕಾಲೆತ್ತಿ ಮೂತ್ರ ಸುರಿಸಿದರೂ
ತಕ್ಕಡಿಯ ತೂಕದಲಿ ಸೇರುಕಲ್ಲಿನ ಭಾರ
ಚಿಕ್ಕಾಸುವಾದರೂ ಕಡಿಮೆಯಾಗುವುದೆ? ॥

* *

ಇನಿತಾದರೂ ನಿನಗೆ ತಿಳಿವು ಬಾರದೆ ನರನೆ
ಕೆನೆಯುವುದು ಕತ್ತೆಯೆ? ಕಪ್ಪೆಲ್ಲ ಕರಿಯೇ?
ತನಿಮಾವು ಎತ್ತರದಿ ಕೈಗೆ ಸಿಗದಂತಿರಲು
ತನಿಖೆ ಮಾಡದೆ 'ಹುಳುಕು' ಎನ್ನಬಹುದೆ? ॥

* *

ಹಾಲು ನೀಡುವ ದನವ ಹಾವು ಕಚ್ಚುವುದೇಕೆ?
ನೋವೇ ತಿಳಿಯದ ಕೂಸು ಅಳುವುದೇಕೆ?
ಮಾವು ತಿಂದರೆ ಮಧುರ ಬೇವು ತಿಂದರೆ ತಿಕ್ತ
ನಾವೇ ನೀಡಿದ ರಕ್ತ ನಮಗೇ ವ್ಯತಿರಿಕ್ತ?! ॥

ಬಂಗಾರವಂ ಕಂಡ ಅಕ್ಕಸಾಲಿಯು ಬಡಿವ
ಶೃಂಗಾರ ಸಾಧನವೆ ನನ್ನ ಮನಸು?
ಅಂಗಾರಕನ ದೋಷವಿರುವ ಹೆಣ್ಣಿನ ಹಾಗೆ
ಬಂಗಾರದಂತಿರುವ ಜನ ಮರುಗಬೇಕೆ? ॥

* *

ಹಸಿರುಡೆಯ ಮೇಲುದಕೆ ಮಸಿಗೀಟು ಎಳೆದಂತೆ
ಕಸಿಯ ಮಾವಿನ ಗಿಡಕೆ "ಬನ್ನಾಣಿಕೆ"ಯಂತೆ!
ಹೇಸುನಾಲಿಗೆಯಿರುವ "ಇಸ್ಸೀ ಈ ಪಾಪಿಗಳು"
ಅಸುವನ್ನಾದರು ಹೀರಿ ಕೊಂಡೊಯ್ಯದಿರಲಿ! ॥

* *

ಹಿಮಗಿರಿಯ ಶಿಖರದಲಿ ಪರಶಿವನ ನಂಬಿದ್ದೆ
ಅಲ್ಲಿ ತೇನ್‌ಸಿಂಗ್ ಹೋಗಿ ಖಾಲಿ ಕೈ ತಂದ
ತಿರುಪತಿಯ ಬೆಟ್ಟವಂ 'ವೈಕುಂಠ'ವೆನ್ನುವರು
ಅದು ದೇವರಂಗಡಿಯೋ ಮುದಿಗೊಡ್ಡು ಬೆಪ್ಪೆ! ॥

* *

ಪ್ರಣಯ, ಸ್ನೇಹ, ಪ್ರೇಮ, ವಿಶ್ವಾಸ, ಉಪಕಾರ
ಆದರ್ಶ, ಉದ್ಧಾರ, ಬರಿಯ ಕನಸುಗಳು
ಎಲ್ಲವೂ ಕೃತಕಗಳೇ ಬಾಯ ಹಲ್ಲೂ ಕೃತಕ
ಇಂತಿರಲು ಭಾವಗಳದೇನು ಸಹಜ? ॥

ಛೀ... ಯಾಕೆ? ಹೀಗೆಲ್ಲ?



ಬಾ! ಬರುವೆ, ನಿಲ್, ಕೊಲುವೆ! ಎನ್ನುತಿದೆ ಅಣುಗುಂಡು
ಇಂತಿರಲು ಮಾನವನಸದೇನು ದಂಡು!
ಜೀವನಕೆ ಬೆಲೆ ಇಲ್ಲ ಈ ಯಂತ್ರಯುಗದಲ್ಲಿ
ಇಂತಿರಲ್ ಸಹ ಬಾಳ್ವೆ ಶಾಂತಿ ಎಲ್ಲಿ? ॥

* *

'ಇವನೀಚ' 'ಇವನಧಮು' 'ಇವರೆಲ್ಲ ನನ್ನವರು'
'ಅವನಿಗೇತರ ಸೊಕ್ಕು' 'ಏನವನ ಹಕ್ಕು?'
'ನೋಡಿಯೇ ಬಿಡುವೆನವನೆಂತು ಬದುಕುವನೆಂದು'
ಎಂದು ಹಾರಾಡುವರು ಜನರು; ನಾಯಕರು ॥

* *

ಎಲ್ಲರೂ ಮನೆಯವರೇ ಎಲ್ಲರಿಗೂ ಸಮಹಕ್ಕು
ಅಧಿಕಾರ ಬಂದಾಗ ಬಾಯ್ ತುಂಬಾ ಮುಕ್ಕು
ಅಪ್ಪನಿಲ್ಲದ ಬಳಗ, ಅಣ್ಣತಮ್ಮರ ಜಗಳ!
ಎಲ್ಲರೂ ರಾಜರೇ ಪ್ರಜೆಗಳಿಲ್ಲ! ॥

* *

ಯಾರಿಗಿದು ಸ್ವಾತಂತ್ರ್ಯ! ಯಾವುದಕೆ ಸ್ವಾತಂತ್ರ್ಯ
ಓಟು ಹಾಕುವುದೊಂದೇ ಬಂದ ಸ್ವಾತಂತ್ರ್ಯ
'ಸಮತೆ' 'ಜನತಾವಾದ' ಆ ವಾದ ಈ ವಾದ
ಇದು ಎಲ್ಲ ಸ್ವಾರ್ಥಿಗಳ ಕಪಟ ವಾದ ॥

## ಛೀ... ಯಾಕೆ? ಹೀಗೆಲ್ಲ? ★

ಪರದೇಶದಿಂ ನಮಗೆ ಕೋಟಿಗಟ್ಟಲೆ ದುಡ್ಡು
ಸಾಲವಾಗಿಯೇ ಬಂತು; ಎಲ್ಲ ಬರಿಗೊಡ್ಡು !
ಸುಲಿಗೆಯಲಿ ಬಂದ ಹಣ ಸಾಲದಲಿ ಬಂದ ಹಣ
ಕೆಲವು ಅಧಿಕಾರಿಗಳ ಕಿಸೆ ತುಂಬ ಝಣ ಝಣ ॥

* *

ಹಸಿದ ಹೊಟ್ಟೆಗೆ ಕೂಳು ಬರಡು ದೇಹಕೆ ಬಟ್ಟೆ
ಕಲಿತ ಸೋಮಾರಿಗಳಿಗೇನಿಲ್ಲ - ಬರಿ ಹೊಟ್ಟೆ
ಒಂದು ಮನೆ ಎರಡಾಯ್ತು ಎರಡು ಹತ್ತಾರಾಯ್ತು !
ಇದರಿಂದ ಏನು ಫಲ ಯಾರಿಗೇನಾಯ್ತು ! ॥

* *

ಏಳನೆಯ ದೊರೆಯಿದ್ದ ಬಹಳಕಾಲದ ಹಿಂದೆ
ಈಗಿಲ್ಲಿ ಆಳುವುದು ಬಿಳಿ ಟೊಪ್ಪಿ ಮಂದೆ!
ನೆಹರುವೇ ನಮ್ಮರಸು ಮಂತ್ರಿಗಳು ಚಾರಕರು
ನಾವೆಲ್ಲ ಸ್ವಾತಂತ್ರ್ಯ ಬಂದ ಸೇವಕರು ! ॥

* *

ಹೊಸತು ಹಳತಿನ ಹೆಣದ ಮೇಲೆ ಕಟ್ಟಿದ ಗೋರಿ
ಈ ಗೋರಿ ಉರುಳಿದರೆ - ಇನ್ನೊಂದು ಭಾರೀ
ಯಾವುದೂ ಹೊಸತಲ್ಲ; ನಿನ್ನ ಕಣ್ಣೇ ಹೊಸತು
ಕಂಡುಕಂಡುದ ಕಂಡು ಕುರುಡಾಗ ಬೇಡ ॥



# ನವ್ಯ ನವನೀತಂ...... ★

ಹಲವು ನೆನಪಿನ ದಿವ್ಯ ಭಂಡಾರ ಜೀವನವು
ಹದಮಾಡಿ ಹೊದೆಸಿರುವ ಚರ್ಮವಾದ್ಯ
ಬಿಗಿಹಾಕಿ ಬಾರಿಸಲು ತಾರಕವ ನುಡಿಸುವುದು
ಬಿಗಿಸಡಿಲೆ ಕೆಲವೊಮ್ಮೆ; ಮೆತ್ತಗಾಗುವುದು ॥

ಚಿಂತನೆಯು ಒಂದು ಪರಿ ಕಲ್ಪನೆಯು ಒಂದು ಪಥ
ಲೇಖನಿಯು ಕಂಡಿರುವ ಕೆಲವು ಕನಸುಗಳು
ಪ್ರತ್ಯಕ್ಷ ಅನುಮಾನಗಳನು ನಂಬುವ ಮನಸು
ಇಂತಿರಲ್ 'ಇದಮಿತ್ಥಂ' ಎನ್ನಬಹುದೆ? ॥



# ತಾಳಿ...ಹಾಕಿದ...ಕಾರು! ★

ತಾಳಿಕಟ್ಟಿದ ಹೆಣ್ಣು ಬೇಡ್ಜ್ ಹಾಕಿದ ನಾಯಿ
'L' ಬೋರ್ಡು ಹಾಕಿರುವ ಮೋಟಾರುಕಾರು ॥

ಇವುಗಳಿಗೆ ಭಯವಿಲ್ಲ
ಅಂತೇ ತಡೆಯೂ ಇಲ್ಲ
ಯಾರ ಮೇಲಾದರೂ ಹರಿಯಬಹುದಲ್ಲ!
ಲೈಸನ್ಸ್ ಸಿಕ್ಕಿಹುದು
ರಾಂಗ್‌ಸೈಡ್‌ಗೂ ಕೂಡ ಹೋಗಬಹುದು
ರಸ್ತೆ ತುಂಬಾ ಅಲೆದು ತಿರುಗಾಡಬಹುದು ॥

ರಸ್ತೆ ತುಂಬಾ ಜನರು ನಿಂತಿದ್ದರೂ....
ತಾಳಿಕಟ್ಟಿದ ಗಂಡ ಮನೆಯಲ್ಲೇ ಇದ್ದರೂ....
ಚಿಕ್ಕಮಗುವಾದರೂ....
ಸನಿಹ ಬಂದರೆ ಸಾಕು....ಗಬಕ್.... ॥

ಯಾರೂ ಕೇಳುವರಿಲ್ಲ!
ಹೆದರಿಕೆಯು ಮೊದಲಿಲ್ಲ!
ಬೋರ್ಡು ಹಾಕಿದೆಯಲ್ಲ?!
ತಾಳಿಕಟ್ಟಿದೆಯಲ್ಲ! – ಮದುವೆ ಆಗಿದೆಯಲ್ಲ! ॥

## ತಾಳಿ..ಹಾಕಿದ..ಕಾರು! ★

ಹೆಂಡತಿಗೆ 'ಬೇಕು' – ಎಂದಾದಾಗ
ಸರಸವಾಡಬೇಕು
ಅವಳ ಗಂಡ (ವಿುಸಿಕೊಂಡ ಭಂಡ)
ಎಲ್ಲ್ಯಾದರೂ ಅವಳ 'ಮೂಡ್' ಸರಿ ಇಲ್ಲದೊಡೆ
ಬದಿಗಿದ್ದು 'ಭಾವನೆಯು' ಹತ್ತಿಕ್ಕಬೇಕು! ॥

ಮಂತ್ರಿಗಳ ಮುಂದೆ ಬಡ ಬೋರ ನಿಂತಂತೆ,
ಓಟು ಬೇಡಲು ಬಂದ ಎಮ್ಮೆಲ್ಯೇಯಂತೆ,
ಕಾದು, ಬಾಗಿ, ನಿಂತಿರಬೇಕು! ॥

"ಛೀ, ಪೀಡೆ, ಗಂಡಸರು ಕಾಮುಕರು
ನಾನ್‌ಸೆನ್ಸ್, ಶೇಮ್‌ಲೆಸ್,–"
(ಪ್ರಿಯಕರನೇ, ಎನ್ನರಸೇ, ಪ್ರಾಣಪ್ರಿಯನೇ ಎಂದಂತೇ)
ಎಂದು ಹಳಿಯಲು ಕೂಡಾ ಅಧಿಕಾರ ಉಂಟು! ॥

ಇದುವೆ ಸಾರ್ ಫ್ರೀಡಮ್
ತಲೆಯಲಿಹ ಹಮ್ಮು! (ಎದೆಯ ದಮ್ಮು)
ಸ್ವಾತಂತ್ರ್ಯ ದರ್ಪ!
ತಲೆ ಎತ್ತಿ ಕುಣಿಯುತಿಹ ಐರೋಪ್ಯ ಸರ್ಪ! ॥

ನವನೀತಂ

ಹೆಂಗಸರ ವೇಣಿಯೋ ಸರ್ಪ ಸರ್ಪ ?
(ಕೂಂದಲನು ಬಂಡಾರಿ ಕತ್ತರಿಸಿ ಇರ್ಪ)
ಎನುವ ಕಾಲವು ಈಗ ಹಾರಿತಪ್ಪಾ
(ತಾಳಿಕಟ್ಟಿದನೇಕೆ ಆ ನಮ್ಮ ಬೆಪ್ಪ ?)
ಶಿವಪ್ಪಾ.... ಕಾಯೋ ತಂದೇ
ಪೀಡೆಯನು ತಾಳಲಾರೇ (ತಾಳಿಹಾಕೀ)
ಕಾಪಾಡಪ್ಪಾ......! ಅಪ್ಪಾsss! ॥

"ಅಪ್ಪಾ ಮದುವೆ ಮಾಡಪ್ಪಾ,
ಬೀಯೋ ಕಲಿತವಳನೇ ನೋಡಿ ಬಾರಪ್ಪಾ !
ಮೂರುಲಕ್ಷವನಾದ್ರೂ ನನಗೆ ತಾರಪ್ಪಾ !"
(ಎಂದು ಕೂಗಿದನಾತ ಕಾಲೇಜು ಬೆಪ್ಪ !) ॥

ಕಾಲಿನ ತುದಿಯಿಂ ಕೂಂದಲ ವರೆಗೂ
ತೆರವೋ ತೆರವು ! ಬರಿದೋ ಬರಿದು ! ॥

ತಾಳಿಕಟ್ಟಿದ ಮೇಲೆ ಯಾರ ಹಂಗೇನು ?
ಲೈಸನ್ಸ್ ದೊರೆತಿಹುದು ಯಾರ ಭಯವೇನು ?
ಗಂಡಸಾದರೆ ಸಾಕು ಯಾರಾದರೇನು ? ॥



# ಡ್ರಾಮಾ...... ★

ಜಗದ ಟಾಕೀಸಿನಲಿ ಜೀವನದ ಡ್ರಾಮಾ
ನೀನು ಕೂಡಾ ಇಲ್ಲಿ ಒಬ್ಬ 'ಗಾಮಾ'
ರಾವಣನು ಆಹುದು ನೀ (ನಿಜವಲ್ಲ ನಟನೆ)
ಅಂತೇ ರಾಮನು ಕೂಡಾ (ಗುಳಿ ಬಿದ್ದ ಗಲ್ಲ) ॥

ನೀನು ಗಾಂಧಿಯೂ ಅಲ್ಲ ತಿಲಕನೂ ಅಲ್ಲ !
ಯಾವುದೂ ಅಲ್ಲ ! ಲೋ-ಈಶ್ವರನೇ ಅಲ್ಲಾ !
ಸಾಗರವ ಲಂಘಿಸಿದ ಹನುಮನೂ ಅಲ್ಲ !
(ಕಾರ್ಬಾರು ಮಾಡಿರುವ ಮಂತ್ರಿಯೂ ಅಲ್ಲ) ॥

ಪರಕಾಯ ಹೊಕ್ಕಿರುವ ಶಂಕರಾಚಾರ್ಯನೇ ?
(ಪರಕಾರ್ಯ ಮಾಡುತಿಹ ಚಪರಾಸಿ ನೀನು!)
ಬೆರಳೆರಡು ತೋರಿಸಿದ ಮಧ್ವಮುನಿಯೋ ?
(ತಲೆಬೋಳು ಮಾಡಿರುವ ಸೋಮಾರಿ ನೀನು) ॥

ಅಲ್ಲ ! ಯಾವುದೂ ಅಲ್ಲ-ಕೇಳೆನ್ನ ಸೊಲ್ಲ
ಬಡವನಿಗೆ ಎಂದಿಗೂ ಆದರ್ಶವಲ್ಲ !
ಇಲ್ಲ ! ಇಲ್ಲದುದಿಲ್ಲ !
ಸ್ವಾರ್ಥ, ವಂಚನೆ, ಕಪಟ, ಕಳವು, ಕೊಲೆ, ಸುಲಿಗೆಗಳು ॥

ಡ್ರಾಮಾ...... ★

ಸತ್ಯ, ಧರ್ಮದ ಹಿಂದೆ ನಡೆಯುತಿಹುದು
ಹಗಲಿನಲೆ ನಡೆಯುವುದು ನಿತ್ಯ ವ್ಯಭಿಚಾರ!
ಶಾಸ್ತ್ರ ಕಾನೂನುಗಳ ಪರದೆ ಮರೆಯಲ್ಲಿ ॥

ಕಾರ್ಯಜಾಣರು ಬಹಳ ಮಂದಿ ಬದುಕಿಹರಿನ್ನೂ
ಸತ್ತವರ ಪ್ರೇತಗಳ ಹಾಗೆ!
(ಬೀರುವಿನೊಳಡಗಿರುವ ಫೈಲಿನಂತೇ)
ಕಾಸಿದ್ದ ನರರೆಲ್ಲ ಕಾಮಚಕ್ರೇಶ್ವರರು
ಬಡವ ನೀನಾದಾಗ; ಹರಕು ಗೂನು! ॥

ಹೆಂಡತಿಯು ಬಯಸುವುದೂ ನಿನ್ನ ಕಾಸನ್ನೇ
ಹ್ಯಾಗೆ ಮಾಡಿದರೂನೂ ಜಗಕೆ ಫ್ಯಾಶನ್ನೇ!
ಹೊರಗೆ ಹೋಗೆನ್ನುವುದೂ ಕೂಡಾ ನಿನ್ನನ್ನೇ! ॥

ಯಾರನೂ ಅತಿಯಾಗಿ ನೇಶಿಸುವ ಹವ್ಯಾಸ
ಕನಸಿನಲ್ಲೂ ಮರೆತು ಆಚರಿಸಬೇಡ! ॥

ನಾಟಕದ ಪಾತ್ರಗಳು ನಿತ್ಯ ಸತ್ಯವೆ ಹೇಳು!
'ಡೈಲಾಗ್ಸು' ಬೊಗಳಿಬಿಡು
ಒಂದಲ್ಲ ಒಂದುಕಡೆ ಪರದೆ ಬೀಳುವುದು ॥



# ಬ್ರಾಹ್ಮಣಿಕೆ?...... ಎಲ್ಲಿ? ★

ಮೂರಾರು ಎಳೆಯಿರುವ ನೂಲಿನಾ ಜನಿವಾರ
ಮೈತುಂಬ ಗೋಪಿ, ಭಸ್ಮ (ಕೆಸರು, ಬೂದಿ)
ಹರಕು ಪಂಚೆಯು ಕಚ್ಚೆ
(ಒಗೆದು ದಿನ-ಎಂಟೆಟ್ಲಿ-ಹದಿನಾರು) ॥

"ಹಾರುವನ ಹಣೆನಾಮ ಹರದಾರಿ ದೂರ"
ಎನುವ ಹಾಗಿರುವ ನಾಮ
ನಾಮ ಒಂದೇ ಸಾಲದೇ....ಮೂರೇ ಬೇಕೇ– ?
ನಾಮದ ಬಲ ಒಂದಿದ್ದರೆ ಸಾಕೋ (ಇನ್ನೇನು ಬೇಕೋ?) ॥

"ಜನ್ಮನಾ ಜಾಯತೇ ಜಂತೂ....
ಬ್ರಹ್ಮ ಜ್ಞಾನೇನ ಬ್ರಾಹ್ಮಣ" (ಮನು ಹೇಳಿದ ಮಾತು)
ಬ್ರಹ್ಮನೆಂದರೆ ನಾಲ್ಕು ಮುಖದವ
ವೇದವನು ಹೇಳಿದವ
ಹೊಕ್ಕಳಲಿ ಹುಟ್ಟಿದವ ಮಗಳ ಗಂಡ!
(ಇದು ಬ್ರಹ್ಮ ಜ್ಞಾನ!) ॥

ಎಂದು ಹೇಳುವ–
ಈತ – ಬ್ರಾಹ್ಮಣ?
ಬರಿಯನಾತ– ॥

## ಬ್ರಾಹ್ಮಣಿಕೆ....? ಎಲ್ಲಿ?

“ನನ್ನಪ್ಪ, ನನ್ನಜ್ಜ, ಪಿಜ್ಜಂದಿರೂ ಕೂಡ
**ವೈದೀಕ ಬ್ರಾಹ್ಮಣರು” “ನಾನೂ ಬ್ರಾಹ್ಮಣನೇ!”**
**ಎನ್ನುವೀತನು “ನಿಜಕೂ ಬ್ರಹ್ಮಜ್ಞಾನಿಯೋ?” ॥**

“ಬ್ರಾಹ್ಮಣರ ಸುಡು, ಕೊಲ್ಲು”
ಎಂದು “ನಾಯ್ಕರ್” ಹೇಳಿದ್ರು (ಯಾಕೆ ಹಗೆಯೋ)
ಯಾಕೆ? ನೀವೇ ನೋಡಿ – ತಪ್ಪೆ – ಸರಿಯೋ? ॥

ಸ್ವಾರ್ಥ, ವಂಚನೆ, ಕಪಟ, ಪರನಿಂದೆ, ವ್ಯಭಿಚಾರ
ದೇವರಂಗಡಿಯಲ್ಲಿ ಬಡಜನರ ಸುಲಿಗೆ!
“ನಾನು ಬ್ರಾಹ್ಮಣ”ನೆನುವ ಒರಟು ಪಿತ್ಥ! ॥

ಒಳಗೆ ನಾರುವ ಹುಣ್ಣು, ಹುಳುಕು, ಮಲಕೂಪ!
ಹೊರಗೆ ಡಂಬಾಚಾರ! ನ್ಯಾಯ, ಧರ್ಮಾತ್ಮ!
ಅಯ್ಯೋ ಪಾಪ! ॥

ಅವಗೆ ಜಾತಿಯೇ ಇಲ್ಲ
ಎನುವ ಅಧಿಕಾರ? – ಇದು ಎಂಥ ಬ್ರಾಹ್ಮಣಿಕೆ!
ಯಾವ ಬ್ರಾಹ್ಮಣನೀತ?
ಇವನು (ಇವನಂ) ಸುಡಬಾರದೆ? ॥

ನ್ನ ಮಗಳಿಗೆ ಮದುವೆ ನಾಳೆ ಮಂತ್ರಕ್ಕೆ ಬನ್ನಿ”
ಂಬದೆಲೆ, ದೊಡ್ಡ ಮಗೆ, ರೂಪಾಯಿ ದಕ್ಷಿಣೆ!
ತಿಗೆ ರವೆಲಾಡು ಹೂರಣದ ಉಂಡೆ!
ಲ್ಲಿ ಹೋಗ್ಯಾದರೂ ಹೊಟ್ಟೆ ತುಂಬಾ ಉಂಡೆ!)
ಂಧು ಕರೆಯಲಿಕ್ಕೇ ಇರುವ ಬ್ರಾಹ್ಮಣಿಕೆ ಬೇಕೆ?! ॥

ಯಜನ, ಯಾಜನ, ದಾನ, ಪ್ರತಿಗ್ರಹ, ಅಧ್ಯಯನ, ಅಧ್ಯಾಪನ
ಇವು ಆರು ಬ್ರಾಹ್ಮಣನ ಕರ್ಮ (ಕರ್ತವ್ಯ)
ಇವುಗಳನು ಮಾಡಿದನೇ (ಅವನ್ ಖರ್ಮ!) ॥

ಟೇಲಿನಲ್ಲೀತ ಕಾಫಿ ಗ್ಲಾಸಂ ತೊಳೆವ (ಎಂಜಲು)
ಲಿಂಗೆ ಬಿಸಿನೀರು ಹಾಕಿ ಮಾರ್ವ
ದು ಎಲ್ಲ ಶಾಸ್ತ್ರದಲಿ ಎಲ್ಲೆಂದು ಹೇಳಿ!
ರ್ಮ ಪೀಠ (ಕೀಟ)ಗಳಿದನು ಎತ್ತಿ ತೋರಿಸಲಿ!
ಸವಿಕ್ರಯಾದ್ಯೋನಿ ದೋಪಾತ್ಽ ಭಕ್ಷ್ಯೈ ಭಕ್ಷ್ಯೈತ್...." ॥

“ಚತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ . .”
ಎಂದಿಹುದು ಗೀತೆ....
ಜನ್ಮನಾ ಜಾಯತೇ ಶೂದ್ರ.... ॥

## ಬ್ರಾಹ್ಮಣಿಕೆ....? ಎಲ್ಲಿ? ★

ಎಂದನಾ ಮನುರಾಯ?
ಹಾಗಾದರೆಲ್ಲಿಹುದು?
ಅಪ್ಪ ಅಜ್ಜಂದಿರಿಂ ಬಂದ ಬ್ರಾಹ್ಮಣಿಕೆ ? ॥

ಬ್ರಾಹ್ಮಣಿಕೆ ಎಲ್ಲಿಹುದು ಓ ಮನುಜನೇ !
ನಿನ್ನ ವ್ಯೈಕ್ಯೆಯಲ್ಲೇ ಅಲ್ಲ ನಾಮುದಲೇ !
ನೀನೀಗ ಹೊತ್ತಿಹುದು ಕೊಳೆತು ನಾರುವ ಹೆಣವ
ಅದು ಬ್ರಾಹ್ಮಣಿಕೆಯದು! ॥

ಯೌವನದ ದಿನಗಳಂ ನೆನೆದು ತುರಿಸುತ್ತಿರುವ
ಮುದಿ ಸೂಳೆಯಂತಿರುವೆ ಒದ್ದಾಡುತಿರುವೆ!
ಅಜ್ಜನಟ್ಟಾಲಮರವೆಂದು ಜೋತೂ ಬಿದ್ದು
ಯಾರಿಗೂ ಬೇಡಾದ ಕಸವಾಗುವೆ! ॥

ಕೆಲವು ಹೇಡಿಗಳೊರೆದ ಶಾಸ್ತ್ರ ನೀತಿಗಳಿಂದ
ಪಾಪ! ನೀನೆಂದೆಂದೂ ಷಂಡನಾದೆ! ॥

ಪೌರುಷವೇ ನಿನಗಿಲ್ಲ, ದುಡಿಯಲಿಕೆ ಗೊತ್ತಿಲ್ಲ
ತೋರಿಕೆಯ ಈ ವೇಶ ಬಹಳ ದಿನ ಸಲ್ಲ ॥

✣✣✣★★✣✣✣

# ದೇವರೇ...... ★

ದೊಡ್ಡಪಟ್ಟಣ ನಡುವೆ ನಾಲ್ಕು ದಾರಿ
ಭಾರೀ ಸರಕಾರೀ ದಾರೀ....
ಈಶ್ವರನ ಗುಡಿಯಿಹುದು!
ಕರಿಯ ಲಿಂಗವದು!
ಮಾಡಿದವ ಮಾಲಿಂಗ
(ಮರದ ಮೇಲ್ ಹಲವಾರು ಮಂಗ!)॥

ಬೆಳ್ಳಿ ತಗಡಿನ ಮೋರೆ ಲಿಂಗಕ್ಕೇ (ಹ್ಞೆ ಹ್ಞೆ)
ಪಾಣಿ ಪೀಟಕೆ ತುಂಬ ಬಟ್ಟೆ ಸುತ್ತಿಹುದು
ಆ ಕಡೆಗೆ ತೀರ್ಥ ಗುಂಡಿ!
ಅದನು ಮೊದಲೇ ತುಂಬಿತ್ತು ಗಿಂಡಿ!
ತೀರ್ಥ ತಿಂಡಿ!॥

ಅದರಲ್ಲಿ ನಾರುತಿದೆ ಹಲವಾರು "ತಿಂಡಿ"!
ಬಾಳೆಹಣ್ಣಿನ ಸಿಪ್ಪೆ, ಕೊಳೆತ ಹೂ, ವೀಳ್ಯದೆಲೆ, ಕೆಂಪುನೀರು
. . . . . . . . ಹಳೆಯ ಹಾಳೇ ಚೂರು ॥

ಇವುಗಳಂ ಹೊಂದಿರುವ
ಆ ಪವಿತ್ರ (ಅಪವಿತ್ರ)
ತೀರ್ಥ ಗುಂಡಿ!॥

ನಂದಲ್ಲಿ ಕೂತಿಹುದು ಕಬ್ಬಿಣದ ಹುಂಡಿ!
ಬಾಯಿ ಬಾರದ ಹಾಗೆ ಹಾಕಿತ್ತು ಗುಂಡಿ!
(ಪೂಜಾರಿಯೂ ನಂಬಿಕಸ್ತ!)
ಪೂಜಾರಿಗಾಗಿಯೋ ಸಿಂತಿತ್ತು 'ಬಂಡಿ'-? ॥

ಆ ಕಡೆಗೆ ಸೀಮೆಂಟ ಬೋರ್ಡು
ಅದರಲ್ಲಿ ಪುಣ್ಯಗಳ ಬೆಲೆಪಟ್ಟಿ
ದೇವರಂಗಡಿಯಲ್ಲಿ ಸಿಗುವ ಸಾಮಾನು! ॥

| | |
|---|---|
| ರುದ್ರಾಭಿಷೇಕ | ನಾಲ್ಕು ರೂಪಾಯಿ |
| ರಂಗಪೂಜೆ | ಹತ್ತು ರೂಪಾಯಿ |
| ಕಾರ್ತಿಪೂಜೆ | ಮೂರು ರೂಪಾಯಿ |
| ಕರ್ಪೂರಾರತಿ | ಕೇವಲ ಎಂಟಾಣೆ |
| ತೀರ್ಥ | ಬರೀ ನಾಲ್ಕಾಣೆ |

ಇಂದೇ ಪೂಜೆ ಮಾಡಿಸಿ ಕೃತಾರ್ಥರಾಗಿ!

ವಿ. ಸೂ:- ಹಣವನು ಹುಂಡಿಗೆ ಹಾಕಿ!

(ಪೂಜಾರಿ ನಂಬಿಕಸ್ತ?)
ದೇವರಂಗಡಿ ಇಟ್ಟ ಜನ ಮಾತ್ರ ಜೇರಿ! ॥

## ದೇವರೇ...... ★

ಈ ನಡುವೆ.... ....
ಪಟ್ಟಿನಾವುದ ಮೂರು ಭಟ್ಟಂಗಳು ಬಂದು
ಪಕ್ಕದಲಿ ನಿಂತಿರುವ ನಾರಿಯರ ಕಂಡು!
(ಪರನಾರೀ ಸೋದರರು)
ಮನಸಿನಲ್ಲೇ ನಗುತ (ಪ್ರಕಾಶ:– 'ಶಂಭೋ' ಎಂದು)
ಸಾಷ್ಟಾಂಗವೆಸಗಿದರ್..... (ನಾರಿಯರ್ ನಿಂತಿರ್ದರ್) ॥

ಹರ ಹರಾ ಎನಲು
ಜಾರಿತ್ತೈ ಅಮಲು

"ದೇವರೇ ನನ್ನ ಮನೆ ಮಠಗಳಂ ಉದ್ಧರಿಸು"
'ಸಕ್ಕರೆಯ ದಾಸ್ತಾನು ಹೆಚ್ಚು ಮಾಡು'
'ನಾನು ಕಟ್ಟಿದ ಕುದುರೆ ಜೂಜಿನಲಿ ಗೆಲ್ಲಲೀ'
'ಒಂದು ಓ.ಸೀ.ಯಾದ್ರೂ ಬರಬಾರದೇ' ॥

ನಾನು ಯಾವಾಗ(ಲೋ) ಮಂತ್ರಿ ಆಗುವುದು
ಬೇರೆಯುದ ಸರಕಾರ ಬೀಳುವುದು ಎಂತು?
ಇತ್ಯಾದಿ ಪ್ರಾರ್ಥಯಿತ್ವಾ! ॥

ಆಕಾಶಾತ್ ಪತಿತಂ......
ದೇವರೇ ನಿನಗೇಕೆ ಈ ಭವಣೆ! ॥

★★★✤✤★★★

# ಶುದ್ಧ ಶುಂಠಿ...... ★

ಕಣ್ಣು ಕಾಣುವ ವರೆಗೂ ಕಗ್ಗಿನ ಕರಿಕಲ್ಲು
ಕಾಳರಕ್ಕಸನಂತೆ
ಕಟ್ಟಾನೆ ಹೊರಳಿ ನಿದ್ರಿಸಿದಂತೆ.......
ಮಲಗಿಹುದು ಎಲ್ಲೆಲ್ಲೂ ! ॥

ಭೀಕರಂ ಭಯಪೂರಿತಂ (ಹೆದರಿದರೆ ಮಾತ್ರ)
ಒಂದುಕಡೆ ಹಲವಾರು ಮಲೆಯಾಳಿ ಕೂಲಿಗಳು
ತಮಿಳು ತುಳುವರು ಕೂಡಾ,
ಒಡೆಯುವರು ಬಂಡೆ, (ಮಂಡೆಯಲ್ಲ, ಪ್ಲೀಸ್)
ಸುತ್ತಿಗೆಯನ್ನೆತ್ತಿ (ಕತ್ತಿ ಎಲ್ಲಿ ?) ॥

ಗಣಪತಿಯ ತಲೆಕಡಿದು
ತಲೆಗಾಗಿ ಹುಡುಕಿಸಿದ – ಈಶನಂತೆ
ಸುರಪುರದ ಕಟ್ಟಕ್ಕೆ
ಅಲ್ಲಿದ್ದ ಕಲ್ಲೆಲ್ಲ ಕಿತ್ತು ಬೀಸಾಡಿಸಿ
(ಕೀಳಲಿಕ್ಕೇ ಕೋಟಿ ರೂಪಾಯಿ ಖರ್ಚು)
(ಯಾಠಪ್ಪನ ಗಂಟು ?)
ಮೇಲೆ ಕಟ್ಟಲಿಕಾಗಿ ಈ ಕಲ್ಲೇ ಬೇಕೆಂದು) ॥

ಬಂದಿಹನು ಇಂಜಿನೀರ್....
ಆಧುನಿಕ ನಳ, ನೀಲ, ಪಿಂಗಲರು
A. E., C. E. ಇನ್ನೂ ಹಲವಾರು 'ಈ'ಗಳು
ಶ್ವರ ಮಾತ್ರವಿಲ್ಲ (ಇವರೆಲ್ಲ ನಶ್ವರರು)
ಕಟ್ಟವೂ ನಶ್ವರವೇ ॥

ಇಂಜಿನೀರ್ ಎನ್ನುವರು ತಮಿಳು ಕೂಲಿಗಳಿವರ
ಇಂಜಿಯೆಂದರೆ ಶುಂಠಿ (ತಮಿಳು)
ನೀರ್ ಎಂದರೆ.... (ನೀರು)
ಅದು ಶುದ್ಧ ನೀರು.... ॥

ಶುಂಠಿ ಎಂದರೆ ಮೂರ್ಖನೆಂದರ್ಥ
ಹಾಗಾದರವರೇನು ಶುದ್ಧಶುಂಠಿಗಳೇ ? ॥

卐卐卐⊖⊖卐卐卐

# ಶಬರಿ...... ★ (ನೀಳ್ಗವನ)

ಕಾದುಕೊಂಡಿರುವಳೋ ಶ್ರೀರಾಮ ಚರಣವನು
ಕಾರುಣ್ಯ ಮೂರುತಿಯ ದಿವ್ಯ ರೂಪವನು
ಕಾಂತಾರ ಮಧ್ಯದಲಿ; ಕೈ ಮುಗಿದು ತಲೆವಾಗಿ
ಕಾಣ ಕೌತೂಹಲದಿ ಕುಳಿತಿಹಳು ಶಬರೀ.... ॥

ಕಾಲನಾಟದ ಕ್ರೂರ ಕೋರೆ ದಾಡೆಗಳಿಂಗೆ
ಕನಸಿನಲೂ ಭಯಪಡದ ಹಣ್ಣು ಮುದುಕಿ
ಶ್ರೀರಾಮನೇ ಬಾರ, ಭವದೂರನೇ ಬಾರ,
ಬಾ ರಾಮಾ.... ಬಾರಲ್ಲ ಎನ್ನಿದಿರು ಬಾರಾ....
ಎನುತ ಹಂಬಲಿಸುವಳು, ಕನಸಿನಲಿ ಕನವರಿಸಿ
"ಹಾ ರಾಮ ಬಂದೆಯಾ," ಎನುತ ಬಡಬಡಿಸಿ;
ಬಳಿಯ ದೊಣ್ಣೆಯ ಪಿಡಿದು ಕತ್ತಲಲಿ ತಡವರಿಸಿ
ಹೊರಬಾಗಿಲಲಿ ನಿಂದು ದೂರ ನೋಡುವಳು ॥

"ಬಾರನೇ ಶ್ರೀರಾಮ ತೋರನೇ ಕಂಗಳಿಗೆ
ಹರಣ ಹಾರುವ ಮುನ್ನ ಕಾಣಬಹುದೆ?" ॥

ಎನುತ ಹಲುಬುವಳಾಕೆ; ಏಕಾಂತದಲ್ಲಿಳಿದು
ಅನುಪಮಾಭನ ದಿವ್ಯ ಚರಣವಂ ನೆನೆದು ॥

ಅರುಣನುದಯಿಪ ಮುನ್ನ ತಂಗೊಳದಿ ಮುಳುಗೆದ್ದು
ನಾರುಮಡಿಯುಟ್ಟು ಬಳಿ ವನಗಳಲಿದು
ಎಲೆ, ಹೂವು, ಹಣ್ಣುಗಳ; ರಾಮ ಪಾದವ ನೆನೆದು
ಎಲೆಯ ಚೀಲದಿ ತುಂಬಿ ಮನೆಗೆ ತಹಳು ॥

ಗಾಳಿಗೆಲೆಯಲುಗಿದರೆ, ಕೋಗಿಲೆಯು ಕೂಗಿದರೆ
ಕಾಕ ಶುಕ ತಾಂ ಬರಿದೆ ಗಳಹುತಿರಲು
"ಹಾ, ರಾಮ ಬಂದನೇ, ಮೋದವಂ ತರುವನೇ
ಹಾರಿತೇ ಕಣ್ಮನದ ಹಳೆಯ ಬಯಕೇ"......
ಬಾಗಿಲಲಿ ತಡೆದವನ, ಬಾಗಿ ವಂದಿಸಿ, ಬಳಿಕ
ಮಾಗಿರುವ ಮಾಂಬಳವ ತಿನಲು ಕೊಡುವೆ
ಹೀಗೆ ಬಾರೆಂದೆನುತ, ಕೈಪಿಡಿದು ಕರೆತರುವೆ.....
ಹೀಗೇ..... ಮಾಡುವೆನೆನುತ ಹಲಬುತಿಹಳು.... ॥

ಗಿರಿ ಶಿಖರಗಳನೇರಿ ದೂರ ನೋಡುವಳೊಮ್ಮೆ
ಹರಿಯ ಮೊಗ ಕಾಣುವುದೇ ಎನುವ ಹಂಬಲದಿ ॥

ಉರಿ ಬಿಸಿಲಿನಲಿ ಹೊರಗೆ ನೆರಳಡಿಗೆ ತಾ ಕುಳಿತು
'ಬರಿದಾಯಿತೇ ಬಾಳು'–ಎನುತ ಮರುಗುವಳು ॥

ಗುಳಿಗೆ ಹೋಗಿದೆ ಕಣ್ಣು ರಾಮಪಾದವನರಸಿ
ಘಳಿಗೆ ಘಳಿಗೆಗೂ ಕಣ್ಣ ನೀರನ್ನೊರಸೀ.....
"ಬಳಿಗೆ ಬಂದರೆ ಸಾಕು ಅರೆಘಳಿಗೆಯೂ ಬಿಡೆನೂ
ಕುಳಿತಿರುವೆನದು ತನಕ"ವೆನುತ ಶಬರೀ..... ॥

"ಕಾದು ಸೋತಿದೆ ಕಾಯ ಬೆಂದು ಸೋತಿದೆ ಜೀವ
ಆದುದಾಗಲಿ ಬಿಡೆನು" ಎನ್ನುತಿದೆ ಮನಸು
ಹೋದ ದಿನಗಳು ಬಹಳ ಇನ್ನು ಕಾದಿರಲಾರೆ
ಪಾದ ಸೇವೆಯ ನೀಡೋ ಶ್ರೀರಾಮಚಂದ್ರ
ಎಂದು ಮನನೊಂದು ತಾ ಭಜಿಸಿ ಪರಿಪರಿಯಾಗಿ
ಸಂದ ದಿನಗಳ ಮರೆತು ಕಾದಿಹರು ಶಬರೀ.....
ಸಂದುದೆಷ್ಟೋ ಯುಗವು ಅಂದಿನಿಂದೀ ವರೆಗೂ
ಕುಂದಿಲ್ಲದೆಲೆ ಕಾದು ಕುಳಿತಿಹಳು ಶಬರೀ..... ॥

ಹಗಲು ಹೊತ್ತಿನ ಪರಿವು ಇಲ್ಲದೆಲೆ ಕಾದಿಹಳು
ಹೆಗಲು ಹೊತ್ತಿಹ ತಲೆಯು ಅಲುಗಾಡುತಿರಲು
ತೊಗಲು ನೆರಿಗಟ್ಟಿರುವ ಕೈಕಾಲುಗಳ ನಡುಗೆ
ಅಗಲ ಬಾಯಂ ತೆರೆದು ರಾಮಾ ಎನ್ನುವಳು ॥

ಶಬರಿ...... ★

ಹಣ್ಣು ಹೂಗಳನೆನಿತೋ ಸಲ ತರಲು ಪೋದವಳು
ಕಣ್ಣು ಕಾಣದೆ ಉರುಳಿ ರಾಮಾಽ ಎಂದಿಹಳು
ತಣ್ಣೀರನೇ ಕುಡಿದು ಕಣ್ಣೀರ ಸರ ಕೋದು
ಕಣ್ಣಾರೆ ರಾಮನಂ ಕಾಣ ಕಾದಿಹಳು ॥

"ಕೋಟಿಕಲ್ಪಾಂತಗಳು ದಾಟಿಹೋದರೂ ಕೂಡಾ
ಸಾಟಿ ಇಲ್ಲದ ರಾಮಮೂರ್ತಿ ಕಾಣಿಸದೇ
ದಾಟೇನೀ ಗುಡಿಸಲಿನ ಬಾಗಿಲಿಂದಾಚೆಕಡೆ
ಕೋಟಿ ಕಾಲರೇ ಬಂದು ಕೆಣಕಿದರೂ ಕೂಡಾ....."
ಶ್ರೀರಾಮನೇ ಬಾರಾ, ಕರುಣಾಳುವೇ ಬಾರ
ಕೈವಲ್ಯದಾಯಕನೇ ಹರಿಯೇ ಬಾರಾಽ
ನೀಬಾರದಿರಲಾನು ಬಿಡುವೆನೆಂದರಿಯದಿರು
ಎನುತ ದೃಢ ಭಕ್ತಿಯಲಿ ಕಾದಿಹಳು ಶಬರಿ..... ॥

* * *

ಬಂದನೋ ಶ್ರೀರಾಮ, ಬಂದನೋ ಗುಣಧಾಮ
ಬಂದನೋ ಭವದೂರ ಭಾಗ್ಯದಾಯಕನು
ತಂದನೋ ಕೈವಲ್ಯ ಪದದ ಕೈಕೀಲಿಯನು
ತಂದನೋ ಶಬರಿಯಳ ಮನದ ಕಾಮನೆಯ ! ॥

ಬಂದ ದೇವರ ದೇವನಾನಂದ ಮೂರುತಿಯ
ಮುಂದೆ ಶಿರ ಬಾಗಿದಳು ಶಬರಿ ಕೈಮುಗಿದು ॥

"ಬಂದೆಯಾ ಮಮ ಬಂಧು ಬಂದೆಯಾ ಮಮ ಜನಕ
ಇಂದಾದರೂ ನಿನಗೆ ಕರುಣೆ ಬಂತೇ.....
ಇಂದಿರಾರಮಣನೇ ಅರಿಘಳಿಗೆ ಬಿಟ್ಟಿರೆನು
ಒಂದಾಗಿಸೆಲೆ ದೇವ ನಿನ್ನೊಳೆನ್ನುವಳು....." ॥

ಎನುತ ಶಬರಿಯು ರಾಮ ಪಾದದಲಿ ಮೈನೀಡಿ
ತನುವಿನಾಸೆಯ ಮರೆತು ಭಜಿಸುತಿರಲು
ಅನುಪಮೇಯಾದ್ಯಂತ ರಹಿತ ಶ್ರೀರಾಮ ಪದ
ಅನುವಾಯಿತೇನೆಂಬೆ ರಾಮ ಮಹಿಮೆಯನು! ॥



ಮುಂದಿನ ಪ್ರಕಟಣೆ—

# ಮಾನಸ ಗೀತೆಗಳು

ಕವಿ:– 'ರಸಿಕ' ಪುತ್ತಿಗೆ

ಪ್ರಕೃತಿಯ ಕೃತಿಯಲ್ಲಿ ಅಧ್ಯಾತ್ಮ ತತ್ವ ದರ್ಶನ!
ನಿತ್ಯಜೀವನಾನುಭವಗಳಲ್ಲಿ ಸತ್ಯ ಪ್ರಕಾಶ!
ವೇದೋಪನಿಷತ್ತುಗಳ ಸಾರ ಸಂಗ್ರಹ
ಮಾನವನ ಮೇಲ್ಮಟ್ಟದ ಮನಸ್ಸಿನ ಮೊರೆತ
ಮನನೀಯ ವಿಚಾರಗಳ ವಿಶ್ಲೇಷಣೆ!

ಈ ಕೃತಿಯು ಉಗಾದಿಯ ಹೊಸತಿಗೆ ಹೊರಬರುವುದನ್ನು
ಇದಿರು ನೋಡಿರಿ.

—ಪ್ರಕಾಶಕರು.



ಶ್ರೀ 'ರಸಿಕ' ಪುತ್ತಿಗೆಯವರು ಕನ್ನಡಿಗರಿಗೆ ಚಿರಪರಿಚಿತರಾದ ತರುಣ ಕವಿ, ಕತೆಗಾರ, ನಾಟಕಕಾರ, ಲೇಖಕರು.

'ನವನೀತ'ವು ಅವರ ಮಾತುಗಳಲ್ಲೇ ಪರಿಚಯವಾಗುವಂತೆ ......"ಭಾವರಸಗಳ ಸಿಹಿಯು ಕಲ್ಪನೆಯ ಪಾಲ್ಗೊಡಕೆ ಸತ್ಯಾನುಭವ ದಳೆಯು ಕಲೆ ಬೆರೆಯಲು ತರ್ಕ ವೈಚಾರಗಳ ಬಳ್ಳಿನಿಂ ಮನ ಮಥನ ಮಾಡೆ ಉದಯಿಸಿತಾಗ ನವನೀತವು."

ಇದರಿಂದ ನವನೀತದ ರುಚಿ ಎಷ್ಟೆಂದು ಅಳೆಯಬಹುದು. "ಹಲವು ನೆನಪಿನ ದಿವ್ಯ ಭಂಡಾರ ಜೀವನವು ಹದಮಾಡಿ ಹೊದೆಸಿರುವ ಚರ್ಮ ವಾದ್ಯ" ಎಂದು ಹೇಳುವ ಇವರ ಜೀವನದ ಬಗ್ಗೆ ಇರುವ ದೃಷ್ಟಿಕೋಣವು ಈ ಕೃತಿಯನ್ನು "ಚಿಂತನೆಯ ಒಂದು ಪರಿ, ಕಲ್ಪನೆಯ ಒಂದು ಪಥ ಲೇಖನಿಯು ಕಂಡಿರುವ ಕೆಲವು ಕನಸುಗಳು" ಎಂದು ಹೇಳಿ ಕವಿಯ ಹಾಗೂ ಕೃತಿಯ ನವ್ಯತೆ, ಭವ್ಯತೆಗಳನ್ನು ಚೆನ್ನಾಗಿ ಪರಿಚಯಿಸುತ್ತದೆ.

**ಡಿ. ಕೃಷ್ಣರಾವ್, B. O. L., B. T**